ಮಕ್ಕಳ ಕಥೆಗಳು.

ಬಾಲಸಾಹಿತ್ಯ ಮಂಡಲ,
ಲಿಮಿಟೆಡ್,
ಕೊಡಿಯಾಲಬೈಲು, ಮಂಗಳೂರು.

# ಬೊಮ್ಮನ ಹಳ್ಳಿಯ ಕಿಂದರಿ ಜೋಗಿ

ಮೈಸೂರಲ್ಲಿರುವ
ಕೆ. ವಿ. ಪುಟ್ಟಪ್ಪ,
ಇವರಿಂದ ರಚಿತವಾದುದು.)

1930

ಬೆಲೆ: ೦—೩—೮.

# ಮುನ್ನುಡಿ



ಇಂದಿನ ಹೊಸ ದಾರಿಯ ಕನ್ನಡ ಕವನಗಾರರಲ್ಲಿ ಒಬ್ಬರಾದ ಶ್ರೀನಿವಾಸ್ ಕೆ. ವಿ ಪುಟ್ಟಪ್ಪನವರ ಬೊಮ್ಮನ ಹಳ್ಳಿಯ ಕಿಂದರಿ ಜೋಗಿ ಎಂಬ ಹೆಸರಿನ ಈ ಕವನವು ರೊಬರ್ಟ್ ಬ್ರೌನಿಂಗ್ ಕವಿಯಿಂದ ರಚಿತವಾದ ದಿ ಪಾಯ್ಡ್ ಪಾಯ್ಪರ್ ಒಫ್ ಹೆಮೆಲಿನ್' (The Pied Piper of Hameline) ಎಂಬ ಇಂಗ್ಲಿಷ್ ಕವಿತೆಯ ಕನ್ನಡ ಅನುವಾದವು. ಇದು ಮೈಸೂರು ಮಹಾರಾಜರ ಕಾಲೇಜು ಕರ್ನಾಟಕ ಸಂಘದಿಂದ ೧೯೩೦ರಲ್ಲಿ ಹೊರಬಿದ್ದ 'ಕಿರಿಯ ಕಾಣಿಕೆ' ಎಂಬ ಹೆಸರಿನ ಕವನ ಪುಸ್ತಕದಲ್ಲಿ ಮೊತ್ತಮೊದಲು ಪ್ರಕಟವಾಯಿತು. ಹೊಸ ದಾರಿಯ ಇಂಥ ಕವನಗಳ ಪರಿಚಯವನ್ನು ನಮ್ಮ ಹಳ್ಳಿಯ ಮಕ್ಕಳಿಗೆ ಮಾಡಿಕೊಡಬೇಕೆಂಬ ಉದ್ದೇಶದಿಂದ ಶ್ರೀನಿವಾಸ್ ಪುಟ್ಟಪ್ಪನವರ ಅನುಮತಿಯನ್ನು ಪಡೆದು ಅವರ ಈ ಚಿಕ್ಕ ಕೃತಿಯನ್ನು ಪುಸ್ತಕ ರೂಪವಾಗಿ ಅಚ್ಚು ಹಾಕಿದೆ. ಅವರು ಅನುಮತಿಯನ್ನು ಕೊಟ್ಟದಕ್ಕಾಗಿಯೂ ಸದಾನಂದ ಮುದ್ರಣಾಲಯದವರು ಇದನ್ನು ತ್ವರೆಯಿಂದ ಮುದ್ರಿಸಿ ಕೊಟ್ಟದಕ್ಕಾಗಿಯೂ ಮಂಗಳೂರು ಬಾಲಸಾಹಿತ್ಯ ಮಂಡಲದ ಚಾಲಕರು ಈ ಮೂಲಕ ಅವರಿಬ್ಬರ ಉಪಕಾರಸ್ಮರಣೆಯನ್ನು ಮಾಡುತ್ತಾರೆ.



ಗೋಡೆಗೆ ತಗುಲಿಸಿದಂಗಿಯು ಜೇಬನು
ದಿನವೂ ಜಪ್ತಿಯು ಮಾಡಿದುವು!
ಮಲಗಿರೆ ಹಾಸಿಗೆಯನ್ನೇ ಹಿಡಿದುವು
ಕೇಶಚ್ಛೇದವ ಮಾಡಿದುವು!
ಬೆಣ್ಣೆಯು ಕದ್ದುವು, ಬೆಲ್ಲವ ಮೆದ್ದುವು
ಎಣ್ಣೆಗೆ ಬಿದ್ದುವು ದಿನದಿನವು!
ಗೌಡರು ಮಾತಾಡುತ ಕುಳಿತಲ್ಲಿ
ಬಹಳ ಗಲಾಟೆಯ ಮಾಡಿದುವು!
ಗರತಿಯರಾಡುವ ಹರಟೆಗೆ ತುಂಬಾ
ತೊಂದರೆಯಿತ್ತುವು ಗಜಿಬಿಜಿಮಾಡಿ.
ಊರಿನ ಮಕ್ಕಳ ಕೈಯಲ್ಲಿದ್ದ
ತಿಂಡಿಯ ಕಸಿದುವು ಧೈರ್ಯದಲಿ!

೩

ಇಲಿಗಳ ಕೊಲ್ಲಲು ಊರಿನ ಜನರು
ತುಂಬಾಯತ್ನವ ಮಾಡಿದರು.
ಕಡಿದರೆ ಮುರಿದುವು ಕತ್ತಿಗಳೆಲ್ಲಾ
ಹೊಡೆದರೆ ಮುರಿದುವು ಕೋಲುಗಳು.
ಇಲಿಗಳ ಬೇಟೆಯನಾಡುತಲಿರಲು
ಮುರಿದುವು ತಮ್ಮನ ಕಾಲುಗಳು!
ಬೇಟೆಯನಾಡಲು ಅಡುಗೆಯ ಮನೆಯಲಿ
ಬಿದ್ದುವು ಬಿಳಿಯೊಡೆದಷ್ಟು!
ಶೃಂಗಾಮಲಕದ ತೈಲವ ಹಚ್ಚಿದ
ಶೇಷಕ್ಕನ ಸಣ್ಣಗೆ ಫಣಿವೇಣಿ,
ಬೆಳಗಾಗೇಳುತ ಕನ್ನಡಿ ನೋಡೆ
ಇಲಿಗಳಿಗಾಗಿತ್ತೂಟದ ಪೇಣಿ!
ರಾತ್ರಿಯು ನೇಳಿಯಹೋಗುತ ಕೊಟ್ಟಿಗೆ
ಗುಂಡುವು, ತಿಂದುವು ದನಗಳ ಕಚ್ಚಲು.

ಹರಿದುವು ಕರುಗಳ ಬಾಲಗಳ!
ಸಿದ್ದೋಜೈಗಳು ಶಾಲೆಗೆ ಹೋಗಿ
ಪಾಠವ ಬೋಧಿಸುತಿದ್ದಾಗ,
ಅಂಗಿಯ ಜೇಬಿಂ ಹೆಳವಿಲಿಯೊಂದು
ಚಂಗನೆ ನೆಗೆಯಿತು ತೂತನು ಮಾಡಿ.
ಲೇವಡಿ ಎಬ್ಬಿಸೆ ಬಾಲಕರಾಳಿ
ಗುರುಗಳಿಗಾಯಿತು ಬಲುಗೇಲಿ!

ಹರಿಯುತಲಿ ರೇಶ್ಮೆಯ ರವಕೆಯ ಕಣಗಳ,
ಕೊಬ್ಬಲು ಕಾಗದ ಮೇರೆಯನು.
ಮುಂಗಾಣದೆ ಬಟ್ಟೆಕ್ಕನು ಹೋಗಿ
ಒತ್ತಿದ ಕೆರೆಯನು ಹಾರಿದನು.
ಸತ್ತೇ ಎಸ್ವತ ಬೀಳದನು!
ಬೇಗನ ಬಾವದಿ ಮಳುತ ನೋಡಲು
ಭಟ್ಟಶಾಸ್ತ್ರಿಯ ಬಸಿವಾರ
ಇಲಿಗಳಿಗಾಗಿತ್ತಾಹಾರ!

ಒಂದಿಲಿ ಸತ್ತರೆ ಎರಡಿಲಿಯಾದುವು.
ಕೊಂದರೆ ಒಂದನು ಎರಡೈತಂದುವು!
ಇಲಿಗಳ ಕಾಟವ ಸಹಿಸಲು ಆರದೆ
ಊರಿನ ಜನರೆಲ್ಲರು ಒಂದಾಗಿ
ಮೂಷಿಕಯಾಗವ ಮಾಡಿದರು,
ದೇವರ ಪೂಜೆಯ ಮಾಡಿದರು,
ಹರಕೆಯ ಹೊತ್ತರು, ಕಾಣಿಕೆ ತೆತ್ತರು
ಮಂತ್ರವ ದಿನದಿನ ಹೇಳಿದರು!
ನಿಷ್ಫಲವಾದುವು ಮಂತ್ರಗಳೆಲ್ಲಾ
ಬಾಯೌ ಬಾಯೌ ಕಳೆದರು ಶಾಸ್ತ್ರಿಗಳೆಲ್ಲಾ
ಕಣ್ ಕಣ್ ಬಿಟ್ಟರು ಪಂಡಿತರೆಲ್ಲಾ
ಕಂಬನಿಗರೆದರು ಜನರೆಲ್ಲಾ!

೩

ಮುಂದಿನ ಮಾರ್ಗವ ಕಾಣದೆ ಜನರು,
ಗೌತಮನ ಬಳಿ ಹೋದರು ಗುಂಪಾಗಿ,
ಗೌತಮನು ಮನೆಯಿಂದೀಚೆಗೆ ಬಂದನು
    ಕಂಗಳನರಳಿಸಿ ಬೆರಗಾಗಿ!
ಕೂಗಿದರೆಲ್ಲರು ಗೌತಮನ ಕುರಿತು,
    ಗೌತಮನು ನಿಂತನು ಸ್ಮೃಮರೆತು:
"ಧೂ! ಛೀ! ಗೌತಮನೆ ನೀ ಹಾಳಾಗ!
ಮಾರಿಯು ಬಲಿಗಳ ಕೊಲ್ಲಿಸೊ ಬೇಗ!
ತಿರುಗಿಯು ಮಾತ್ರ, ಕಾಸೂ ಬಿಡದೆ
ಹೊಡೆದೂ ಬೈದೂ ಸುತ್ತುವೆ ನೀನು.
ನಿನ್ನ ದುರಾತ್ಮನ ಬಲಿ ಮಾನವಾಗ,
ನಿನ್ನೀ ಗಂಟಲು ಕಟ್ಟೀ ಹೋಗ!
ಬಲಿಗಳ ನಯಿಸವ ಕೊಲ್ಲಿಸೂ ಬೇಗ!
ಬೆಂಕಿಯನಿಡುವೆವು ನಿನ್ನೀ ಮನೆಗೆ,
ಕೊಲ್ಲಿಸದಿರೆ ಬರೆಯಿಡುವೆವು ನಿನಗೆ!
ಕಸುಗೆ ಮಾತ್ರ ಗೌತಮನೆ ನೀನು
ಮಾನವೆ ಇಲ್ಲವೆ, ಛೀ! ನಿನಗೇನು?

೪

    ಈ ಪರಿ ಬೈದರು ಜನರೆಲ್ಲ
    ಗೌತಮನು ಬಾಯೇ ಬಿಡಲಿಲ್ಲ!
ಜನರೆಲ್ಲ ಹಿಂತಿರುಗಿದ ಮೇಲೆ
    ಗೌತಮನು ಓಡಿದ ಚಾವಡಿಗೆ:
ಕರೆದನು ಊರಿನ ತಲೆಯಾಳುಗಳ
ಕಟ್ಟೆ ಮೇಲ್ಲಿಯೆ ಸಭೆಸೇರಿದರು.
ಜನರೆಲ್ಲಾ ಚರ್ಚೆಯ ಮಾಡಿದರು:
ಜನರೆಲ್ಲಾ ವಾದವ ಹೂಡಿದರು.
    ಹೊರಟವು ಯುಕ್ತಿಯ ಮಾತುಗಳು,

ಮಾತೊಳು ಮನೆಯನು ಕಟ್ಟಿದರು.
ಅಂತೂ ಋಷಿಗಳ ಕೊಲ್ಲುವ ಬಗೆಯು
ಒಬ್ಬರಿಗಾದರು ಹೊಳೆಯಲೆ ಇಲ್ಲ.
ಗೌಡನು ತಲೆತಲೆ ಹೊಡಕೊಂಡ.
ಬಿಲ್ಲದೆ ಎದೆಯೆದೆ ಬಡಕೊಂಡ.
ಕಡೆಗಾ ರಂಗೇಗೌಡನು ಹೂಂಗೆ
ಬೆಂಕಿಯ ಹಾಕುವ ಸಲಹೆಯ ಕೊಟ್ಟ'
ಹೂಡನೆ ಎಂಟತ್ತ ಜನಬೇಕೆಂದು
ರಾಮಾಶಾಸ್ತ್ರಿಗಳಾಡಿದರು!
ತಿಪ್ಪಂಭಟ್ಟರು ಚಿಂತಿಸಿ ಚಿಂತಿಸಿ
'ದೇವರು ಮಾಡಿದುದಾಗಲಿ' ಎಂದರು!
ಸಲಹೆಗಳೆಲ್ಲಾ ಮುಗಿದಾ ಮೇಲೆ
ಗೌಡನು ಜನರನು ಕುರಿತಿಂತೆಂದ,
'ಋಷಿಗಳ ನಾಶಕುಪಾಯವನಾರು
ತೋರಿಸಿ ಕೊಡುವರೊ, ಅವರಿಗೆ ಆರು
ಸಾವಿರ ನಾಣ್ಯಗಳೀಯುವೆ ನಾನು
ತಿಳಿದವರಿದ್ದರೆ ಒಪ್ಪಿರಿ! ಏನು?'

೧೪

ಒಬ್ಬರ ಮೊಗವನು ಒಬ್ಬರು ನೋಡುತ
ಮಾತಾಡದೆ ಇದ್ದರು ಜನರೆಲ್ಲಾ!
ಗೌಡನು ಕೂಗಿದ ಮೊದಲನೆ ಸಾರಿ
ಯಾರೂ ಮುಂದಕೆ ಬಾರಲೆ ಇಲ್ಲ.
ನಾಣ್ಯಗಳೆಂಬಾ ಮಾತನು ಕೇಳಿ
ಮುಂಗೈತಿಟ್ಟರು ಕೋಪವ ತಾಳಿ
ಬ್ರಹ್ಮನ ರಾಣಿಯು ದೂರಿದರು:
ಮೊದಲನು ಸೀಡದೆ ತಲೆಯನು ಮಾಡಿದ
ಕಮಲಜನನು ಬೈದಾಡಿದರು'

ಸುತ್ತಲು ನೋಡುತ ಗೌಡನು ಮತ್ತೆ
ಎರಡನೆ ಸಾರಿಯು ಕೂಗಿದನು.
ಆಸೆಯನೆಲ್ಲವ ನೀಗಿದನು!
ಕೂಗಿದನಾತನು ಮೂರನೆ ಸಾರಿ
ಮಾತೇ ಇಲ್ಲವು ಎಲ್ಲಿಯು ಮೌನ!
ಮುಂದಲೆ, ಹಿಂದಲೆ ಎರಡನು ಉಜ್ಜುತ
ಕಂಗಳ ಕೆರಳಿಸಿ, ಹಲ್ಲನು ಕಡಿಯುತ,
ಶೆಟ್ಟರು ಬಲು ಪೇಚಾಡಿದರು.
ಆನೇಶನ ದಯಪಾಲಿಸು ಎನ್ನುತ
ಪ್ರಾಣಿಯ ಪರಿಪರಿ ಬೇಡಿದರು!

೭

ಏನಿದು ಗುಜುಗುಜು ಗುಂಪಿನಲಿ?
ನೋಡಿದರೇನಾಶ್ಚರ್ಯವನು!
ಆಲಿಸಿ! ದೂರದ ಕಿಂದರಿ ನಾದ!
ಬರುವನು ಯಾರೋ ಕಿಂದರಿ ಜೋಗಿ!
ಹತ್ತಿರ, ಹತ್ತಿರಕವನೈತಂದ
ಬಂದಿತು ಜನರಿಗೆ ಬಂದಾನಂದ!
ನೋಡಿರಿ! ನೋಡಿರಿ ಕಿಂದರಿ ಜೋಗಿ!
ನೋಡಿದರೆಲ್ಲರು ಬೆರಗಾಗಿ!
ಬಂದನು! ಬಂದನು ಕಿಂದರಿ ಜೋಗಿ!
ಕೆದರಿದ ಕೂದಲ ಗಡ್ಡದ ಜೋಗಿ!
ನಾನಾ ಬಣ್ಣದ ಬಟ್ಟೆಯ ಜೋಗಿ!
ಕೈಯಲಿ ಕಿಂದರಿ ಹಿಡಿದಾ ಜೋಗಿ!
ಕುದುರೆಯ ಗೊರಸಿನ ಅಡಿಗಳ ಜೋಗಿ!
ಕಡವೆಯ ಕೊಂಬಿನ ತಲೆಯಾ ಜೋಗಿ!
ಆನೆಯ ಕಿವಿಗಳ ಕಿಂದರಿ ಜೋಗಿ!
ಹಂದಿಯ ದಾಡೆಯ ಕೋರೆಯ ಜೋಗಿ!
ಮಂಗನ ಮೂತಿಯ ಮುಖದಿಹ ಜೋಗಿ!

ಬಂದನು ಬಂದನು ಕಿಂದರಿ ಜೋಗಿ!
ಹಾರುತ, ತೇಲುತಲಿಳಿದನು ಜೋಗಿ!
ಕೈಕೈ ಮುಗಿಯುತ ಕಣ್ಣೀರಿಡು
ಹಿಂದಕೆ ಸರಿಯುತ ಜನರೆಲ್ಲಾ,
ದಾರಿಯ ಬಿಟ್ಟರು ಕಿಂದರಿ ಜೋಗಿಗೆ!
ಜೋಗಿಯು ಹತ್ತಿದ ಗೌಡನ ಕಟ್ಟೆಯ
ಗೌಡನ ಹೃದಯವು ಬಾಯ್ಗೇ ಬಂದಿತು
ಗಡಗಡ ಗಡಗಡ ನಡುಗಿದನು!
ತೊದಲುತ, ಬೆದರುತ, ಕಂಪಿತಕಂಠದಿ
ನೀನಾರೆಂದನು ಜೋಗಿಯ ಕುರಿತು.
ಅದಕಾ ಜೋಗಿಯು ಇಂತೆಂದ:
ಕೇಳಿದರೆಲ್ಲರು ಬಾಯ್ಬಿಟ್ಟು.
'ಹಿಮಗಿರಿಯಲ್ಲಿಹ ಜೋಗಿಯು ನಾನು
ಪರಮೇಶ್ವರನಿಗೆ ಗೆಳೆಯನು ನಾನು,
ನಿಮ್ಮ ಗೋಳನು ಕೇಳಿದ ಶಿವನು
ನನ್ನನಿಲ್ಲಿಗೆ ಕಳುಹಿದನು.
ಇಲಿಗಳನೆಲ್ಲಾ ಕೊಂದರೆ ಆರು
ಸಾವಿರ ನಾಣ್ಯಗಳೀಯುವೆಯಷ್ಟೆ?'

೬

ಉಬ್ಬಿತು! ಉಕ್ಕಿತು ಗೌಡನ ಸಂತಸ!
ಶಹಭಾಸೆಂದರು ಜನರೆಲ್ಲ.
ಗೌಡನು ಜೋಗಿಯ ಕುರಿತಿಂತೆಂದ;
ಜನರದನೆಲ್ಲಾ ಕೇಳಿದರು;
"ಬೇಕಾದುದ ನಾ ಕೊಡುವೆನು ಜೋಗಿ
ಆರೇಕಿನ್ನೆರಡಾದರು ಕೊಡುವೆನು.
ಬೇಕಾದುದನೆಲ್ಲವ ನೀ ಕೇಳು
ಊರೇ ನಿನ್ನದು! ನಾ ನಿನ್ನಾಳು!
ಆದರೆ ಒಂದೇ ಸಂದೇಹ—

ಇಲಿಗಳನೋಡಿಸ ಶಕ್ತಿಯು ನಿನಗೆ
ನಿಜವಾಗಿರುವುದು ಹೌದಷ್ಟೆ
ಜೋಗಿಯು ಹಿಂತಿರುಗೆಲ್ಲರ ನೋಡಿ,
ಕೈಯ ಕಿಂದರಿಯನು ಸರಿಮಾಡಿ,
ಗಡ್ಡವ ನೀವುತ ದುರದುರು ನೋಡಿ,
ಗೌಡನ ಕಡೆ ತಿರುಗಿಂತೆಂದ:
'ಕೃತಯುಗದೊಳು ಕೈಲಾಸದೊಳು
ಇಲಿಗಳ ಕಾಟವು ಮಿತಿಮೀರೆ,
ಇಲಿಗಳ ಕೊಲ್ಲುವೆನೆಂಬಾ ರೋಷ
ಏರಲು ಭೈರವನಾದನು ಈಶ
ಆದರು ಆಗದೆ ಮೂಷಿಕನಾಶ
ನಂದಿಯು ಕಳುಹಿದನೆನ್ನೆಡೆಗೆ,
ಕೊಂದೆನು ಅವುಗಳ ನಾ ಕಡೆಗೆ'
ಕಾಮನ ದಹಿಸಿದ ಹಣೆಗಣ್ಣು
ಮೂಷಿಕರೋಮನ ಸುಡಲಿಲ್ಲ'
ಜೋಗ್ಯನ ಯುಕ್ತಿಯ ಜನರೇ ಕೇಳಿ
ಮುಂದಿನ ಕಥೆಯನು ಮುಗಿಸುವೆ ಹೇಳಿ.
ದ್ವಾಪರ ಯುಗದೊಳು ವೈಕುಂಠದೊಳು
ಮೂಷಿಕಸೈನ್ಯಕೂ ಜಯವಿಜಯರಿಗೂ
ಭೀಕರಕಾಳಗ ಜರುಗಿತು, ಕಡೆಗೆ
ಆ ಜಯವಿಜಯರು ವಿಷ್ಣುವಿನೆಡೆಗೆ
ಓಡುತ್ತ ಹೋದರು ಮೊರೆಯಿಡಲು
ಮೂಷಿಕಸೈನ್ಯಕೆ ಸೈಸೋತು!
ಕಡೆಗಾ ವಿಷ್ಣುವೆ ಚಕ್ರವ ಹಿಡಿದು
ಮೂಷಿಕಬಳಗವ ಕೊಲ್ಲುವೆನೆಂದು
ಕದನವ ಮಾಡಲು ಇಲಿಗಳ ಕೂಡೆ
ಮೂರ್ಛೆಗೆ ಸಂದನು ಬಿಲುಬಿಳಲಿ!
ವಿಷ್ಣುವೆ ಸೋತನು ಕದನದಲಿ!

ಪೀತಾಂಬರವನು ಹರಿದುವು ಕೆಲವು;
ಚಕ್ರದ ಹಲ್ಲನು ಮುರಿದುವು ಕೆಲವು!
ಕೌಸ್ತುಭರತ್ನವನಪಹರಿಸಿದುವು!
ಶಂಖವ ಭೂಂ ಭೂಂ ಊದಿದುವು!
ಗದೆಯನ್ನೆಳೆದು ಬಿಸಾಡಿದುವು!
ರಾಕ್ಷಸಕೋಟಿಯ ಕೊಂದಾ ಚಕ್ರವು
ಬಿರಿದಾಯಿತು ಇಲಿಗಳ ಮುಂದೆ.
ಕಡೆಗೆನ್ನನು ಕರೆಕಳುಹಿದನು,
ಮೂಷಿಕನಾಶನ ಮಾಡಿದೆನು!
'ಕಿಂದರಿಜೋಗಿಯೆ ನಿಲ್ಲಿಸು, ಸಾಕು;
ನೀ ಗಟ್ಟಿಗನೆಂಬುದು ಗೊತ್ತಾಯ್ತು!
ನಿನ್ನ ಪರಾಕ್ರಮಕಂತ್ಯವೆ ಇಲ್ಲ.
ಗೆಳೆಯರು ನಿನ್ನನು ಮೀರ್ವರರಿಲ್ಲ.
ನಮ್ಮೂರಿಲಿಗಳ ಸಂಹರಿಸು,
ಬೇಕಾದುದ ನಾವೀಯುವೆವು!'
ಎಂದನು ಗೌಡನು ಸಂತಸದಿಂದ
ಜನತತಿಗಾದುದು ಅತ್ಯಾನಂದ!

೮

ಮರುಮಾತಾಡದೆ ಕಿಂದರಿಜೋಗಿ
ಕಟ್ಟೆಯನೇರಿದನು ಬೀದಿಗೆ ಹೋಗಿ.
ಗಡ್ಡವ ನೀವುತ ಸುತ್ತಲು ನೋಡಿ
ಮಂತ್ರವ ಬಾಯಲಿ ಮಣಮಣ ಹಾಡಿ,
ಕಿಂದರಿ ಬಾರಿಸತೊಡಗಿದನು,
ಜಗವನೆ ಮೋಹಿಸಿತಾ ನಾದ!
ಏನಿದು? ಏನಿದು? ಗಜಿಬಿಜಿ ಎಲ್ಲಿ!
ಊರನೆ ಮುಳುಗಿಸ ನಾದವಿದೆಲ್ಲಿ!
ಇಲಿಗಳು! ಇಲಿಗಳು! ಇಲಿಗಳ ಹಿಂಡು!
ಬಿಳಿಬಿಳಿ ಬಂದುವು ಇಲಿಗಳ ದಂಡು!

ಅನ್ನದ ಮಡಕೆಯನಗಲಿದುವು!
ಜೋಪಿಯ ಗೂಡನು ತ್ಯಜಿಸಿದುವು!
ಬಂದುವು ಅಂಗಿಯ ಜೇಬನು ಬಿಟ್ಟು,
ಮಕ್ಕಳ ಕಾಲಿನ ಚೀಲವ ಬಿಟ್ಟು.
ಹಾರುತ ಬಂದುವು, ಓಡುತ ಬಂದುವು,
ನೆಗೆಯುತ ಬಂದುವು, ಕುಣಿಯುತ ಬಂದುವು,
ಜೋಗಿಯು ಬಾರಿಸೆ ಕಿಂದರಿಯ.
ಸಣ್ಣಿಲಿ, ದೊಡ್ಡಿಲಿ, ಮೂಗಿಲಿ, ಸುಂಡಿಲಿ
ಅಣ್ಣಿಲಿ, ತಮ್ಮಿಲಿ, ಅಪ್ಪಿಲಿ, ಅಮ್ಮಿಲಿ,
ಮಾವಿಲಿ, ಭಾವಿಲಿ, ಅಕ್ಕಿಲಿ, ತಂಗಿಲಿ,
ಗಂಡಿಲಿ, ಹೆಣ್ಣಿಲಿ, ಮುದುಕಿಲಿ, ಹುಡುಗಿಲಿ,
ಎಲ್ಲಾ ಬಂದುವು ಓಡೋಡಿ,
ಜೋಗಿಯು ಬಾರಿಸೆ ಕಿಂದರಿಯ!
ಬಂದುವು ನಾನಾಬಣ್ಣದ ಇಲಿಗಳು
ಕೆಂಪಿನ ಇಲಿಗಳು, ಹಳದಿಯ ಇಲಿಗಳು,
ಬೆಳ್ಳಿಲಿ, ಕರಿಯಿಲಿ, ಗರಿಯಿಲಿ, ಹೊಲಬಿಲಿ,
ಕುಂಕುಮರಾಗದ, ಚಂದನರಾಗದ,
ಹಸುರಿನ ಬಣ್ಣದ, ಪಚ್ಚೆಯ ವರ್ಣದ,
ಸಂಜೆಯ ರಾಗದ, ಗಗನದ ರಾಗದ,
ನಾನಾ ವರ್ಣದ ಇಲಿಗಳು ಬಂದುವು,
ಕುಣಿಯುತ ನಲಿಯುತ ಸಂತಸದಿ,
ಜೋಗಿಯು ಬಾರಿಸೆ ಕಿಂದರಿಯ!
ನೋಡಿರಿ! ಕಾಣಿರಿ! ಬರುತಿಹುವಿನ್ನೂ!
ಅಟ್ಟದ ಮೇಲಿಂ ಬರುವುವು ಕೆಲವು!
ಕಣಜದ ಕಡೆಯಿಂ ಬರುವುವು ಕೆಲವು!
ಓಹೋ! ಬಂದುವು ಹಿಂಡ್ಹಿಂಡಾಗಿ!
ಕುಂಟಿಲಿ, ಕಿವುಡಿಲಿ, ಹೆಳವಿಲಿ, ಮೂಗಿಲಿ,
ಚೀ! ಪೀ! ಎನ್ನುತ ಕೂಗುತಲೋಡಿ

ಗಹಗಹಿಸುತ ನರಿ ನಲಿನಲಿದಾಡಿ
ಬಂದಿತು ಮೂಷಿಕಸಂಕುಲವು
ಜೋಗಿಯು ಬಾರಿಸೆ ಕಿಂದರಿಯ!

೯

ಬೊಮ್ಮನಹಳ್ಳಿಯ ಕಿಂದರಿಜೋಗಿ
ಹೊರಟನು ತುಂಗಾನದಿಯೆಡೆಗಾಗಿ.
ಕಿಂದರಿನಾದವು ಗಗನಕ್ಕೇರಿತು
ಇಲಿಗಳನೆಲ್ಲಾ ಮನಮೋಹಿಸಿತು!
ಕಿಂದರಿಜೋಗಿಯ ಹಿಂಬಾಲಿಸಿದರು
ಜನಗಳು ನೋಡಲು ಕೌತುಕವ,
ಜೋಗಿಯು ನಡೆದನು, ಇಲಿಗಳು ನಡೆದುವು,
ನೋಡಿದರೆಲ್ಲರು ನದಿಯೆಡೆಯ;
ಹೊಳೆಯಾ ಮರಳಿನ ಗುಡ್ಡೆಯ ತುಂಬಾ
ನೋಡಿದರೆಲ್ಲಿಯು ಮೂಷಿಕಗುಂಪೇ!
ಉಸಿರಾಡದೆ ನಿಂತರು ಜನರೆಲ್ಲಾ
ಮುಂದೇನಾಗುವುದೆಂದಲ್ಲಿ!
ವಿಬುಧರು ಕವಿದರು ಗಗನದಲಿ
ಹೂಮಳೆ ಕರೆದರು ಹರುಷದಲಿ;
ದುಂದುಭಿನಾದವ ಮಾಡಿದರು,
ಕಾಣದ ಬೆರಗನು ನೋಡಿದರು!
ಸುತ್ತಲು ನೋಡಿದ ಕಿಂದರಿಜೋಗಿ
ನಡೆದನು ಹೊಳೆಯಾ ನೀರಿನ ಮೇಲೆ!
ನೋಡಿದ ಜನರೆಲ್ಲರು ಬೆರಗಾಗಿ,
'ಜಯಜಯ ಜೋಗೀ!' ಎಂದರು ಕೂಗಿ!
ಇಲಿಗಳು ಒಂದರ ಮೇಲೊಂದು
ಹಿಂಬಾಲಿಸಿದುವು ಜೋಗಿಯನು;
ಬುಳುಬುಳು ನೀರೊಳು ಮುಳುಗಿದುವೆಲ್ಲಾ

ಹಣವಾಗಲ್ಲಿಯೆ ತೀರಿದುವು.
ಎಲ್ಲಾ ಮುಗಿದುವೆಂದೆನೆ, ಅಲ್ಲಾ
ರಾಮಣ್ಣಸಂದದ ಮೂಷಿಕವೊಂದು
ದೃಷ್ಟವಾಗೀಜುತ್ತ ಸೇರಿತು ದಡವ!

೧೦

ಆಗದು ಜನರಿಗೆ ಈ ಪರಿ ಸುಳಿಯಿತು
ಕಿಂದರಿನಾದದ ಅನುಭವನ;
'ಕಿಂದರಿ ಬಾರಿಸಿದಾಗಲೆ ಇಲ್ಲಿಯು
ಹೋಳಿಗೆವಾಸನೆ ತುಂಬಿದುದು.
ಯಾರೋ ಹೋಳಿಗೆ ಮಾಡುವರೆಂದು
ಗೂಡನು ಬಿಟ್ಟೆವು ಹೊರಗಡೆ ಬಂದು.
ನೋಡಲು ಹಬ್ಬದ ರಾಶಿಯು ಕಂಡವು
ವಿಧವಿಧ ತಿಂಡಿಗಳೆಲ್ಲಾ ಜೋಗಿಯ
ಸುತ್ತಲು ಮೆರೆವುದ ನೋಡಿದೆವು!
ಬಲಗಡೆ ದೊಡ್ಡ ಮಿಠಾಯಿಯ ರಾಶಿ,
ಎಡಗಡೆ ಬೆಣ್ಣೆಯ ಮುದ್ದೆಯ ರಾಶಿ,
ತಲೆಯೊಳು ಸಕ್ಕರೆ, ಕೈಯೊಳು ಬೆಲ್ಲ
ಬಿಸ್ಕಿಟ, ಬಿಸ್ಕಿಟ, ಎಂದುವು ಎಲ್ಲ!
ಹಿಂಬಾಲಿಸಿದೆವು ನಾವುಗಳು
ತಿಂಡಿಯ ತಿನ್ನುವ ಛಲದಿಂದ.
ಕಡೆಗಿಲ್ಲವು ಬರಿ ಬಯಲಾಯ್ತು,
ತಿಂಡಿಯು ಹರಿಯುವ ಹೊಳೆಯಾಯ್ತು'
ಜನರೆಲ್ಲರು ಮಾಯೆಗೆ ಬೆರಗಾಗಿ
'ಜಯಜಯ ಜೋಗೀ!' ಎಂದರು ಕೂಗಿ'
ಬಿಳಿದಾಯಿತು ಗೌಡನ ಮುಖಮಾತ್ರ
ಹಣಕೊಡಬೇಕಾಯ್ತಲ್ಲಾ ಎಂದು!

ಕಿಂದರಿಜೋಗಿಯು ಹಿಂದಕೆ ಬಂದ
'ಗೌಡನೆ, ನಾಣ್ಯಗಳನು ಕೊಡು' ಎಂದ!
ಗೌಡನು ನೋಡಿದ ಬೆರಗಾಗಿ,
'ಸಾವಿರ ಆರೂ' ಎಂದನು ಜೋಗಿ!
ಗೌಡನು ಚಿಂತಿಸಿ ತಲೆದೂಗಿ!
'ಕಿಂದರಿಜೋಗಿಯೆ ಹೇಳುವೆ ಕೇಳು
ಸಾವಿರ ಆರನು ನಾ ಕೊಡಲಾರೆನು,
ನೀ ಮಾಡಿದ ಕೆಲಸವು ಹೆಚ್ಚಲ್ಲ
ಸುಮ್ಮನೆ ಕಿಂದರಿ ಬಾರಿಸಿದೆ.
ಇಲಿಗಳ ಹೊತ್ತೆಯ ನೀನೇನು?
ಅವುಗಳು ತಮ್ಮಷ್ಟಕೆ ತಾವೇ
ಬಿದ್ದುವು ಹೊಳೆಯಲಿ ಮುಳುಗಿದುವು!
ಕೊಡುವೆನು ನೀ ಪಟ್ಟ ಶ್ರಮಕಾಗಿ
ಕಾಸ್ಯದಾರನು ತೆಗೆದುಕೊ ಜೋಗಿ,
ಪುಂಗಡಲೆಯ ಕೊಂಡುಕೊ ಹೋಗಿ!'
ಈ ಪರಿ ನುಡಿಯಲು ಗೌಡನು, ಜೋಗಿಯು
ಕಂಗಳ ಕೆರಳಿಸುತಿಂತೆಂದ.
'ಆಡಿದ ಭಾಷೆಯ ತಪ್ಪುವೆಯು?
ಸಾವಿರ ಆರನು ಕೊಡದಿರೆ ನೀನು
ಮತ್ತೀ ಕಿಂದರಿ ಬಾರಿಸುವೆ!
ನಿಮ್ಮಾ ಹಳ್ಳಿಯ ನಾಶಿಸುವೆ!'
'ಸಾವಿರವಾರನು ಕೊಡುವರದಾರು?
ಅಪ್ಪನ ಗಂಟೇ? ಹೋಗೋ, ಜೋಗಿ!
ನೀ ಮಾಡುವುದೇನನು ನೋಡುವೆನು
ಮಾತಾಡದೆ ತೊಲಗಿಲ್ಲಿಂದ!
ಹೆಚ್ಚಿಗೆ ಮಾತೇನಾದರು ನುಡಿದರೆ
ಕಿಂದರಿಯೊಡೆಸುವೆ, ಗಡ್ಡವ ಸುಡಿಸುವೆ
ನಿನ್ನೀ ತಲೆಯನು ಬೋಳಿಸುವೆ;

ಕಿಂದರಿ ತಂತಿಯು ಹರಿಯುವ ವರೆಗೂ
ಬಾರಿಸು ಬೇಡೆಂದವರಾರು?
ಬಲ್ಲೆಯ ನಾನಾರೆಂಬುದನು?
ಊರ ಪಟೇಲನು ಹಳ್ಳಿಗೆ ಗೌಡ!
ನಡೆ, ನಡೆ, ಮರುಮಾತಾಡದಿರು!'

೧೩

ಗೌಡನ ನುಡಿಯನು ಕೇಳಿದ ಜೋಗಿಯು
ಕಿಂದರಿ ಬಾರಿಸ ತೊಡಗಿದನು.
ನಾದವು ಹಬ್ಬಿತು ಊರೊಳಗೆಲ್ಲಾ,
ಕರೆಯಿತು ಊರಿನ ಹುಡುಗರನೆಲ್ಲಾ!
ಓಡುತ ಬಂದರು ಬಾಲಕರು,
ಕೇಳದೆ ಹಿರಿಯರ ಮಾತುಗಳ:
ಬೊಮ್ಮನಹಳ್ಳಿಯ ಕಿಂದರಿಜೋಗಿ
ಕಿಂದರಿ ಬಾರಿಸಿದನು ಇಂಪಾಗಿ!
'ಟಿಂಗಾ! ಟಿಂಗಾ! ಟಿಂಗಾ! ಟಿಂಗಾ!' ನಾದವ ಕೇಳಿ
ಚಂಗಾ! ಚಂಗಾ! ನೆಗೆದರು ಬಾಲಕರು.
ಕಿಂದರಿಜೋಗಿಯು ಹೊರಟನು ಮುಂದೆ
ಬಾಲಕರೆಲ್ಲರು ನಡೆದರು ಹಿಂದೆ!
ಊರಿನ ಜನರೆಲ್ಲರು ಭಯದಿಂದ
ಬಂದರು 'ಮಕ್ಕಳ ಗೌಡನೆ ಕೊಂದ
ಹಾಳಾದೆವು ಗೌಡನ ದೆಸೆಯಿಂದ'
ಗೌಡನು ಕೂಗಿದ ಹೆದರಿಕೆಯಿಂದ
ಜೋಗೀ! ಜೋಗಿ! ಹಿಂತಿರುಗೆಂದ
ಕಿಂದರಿ ಜೋಗಿಯು ನಡೆದನು ಮುಂದೆ,
ಬಾಲರು ಓಡುತ ಹೋದರು ಹಿಂದೆ.
ಕುಂಟರು ಭರದಿಂದೋಡಿದರು!
ಕುರುಡರು ನೋಟವ ನೋಡಿದರು!
ಮೂಗರು ನುಡಿಮಾತಾಡಿದರು!

ಕಿವುಡರು ನಾದವ ಕೇಳಿದರು!
ಬಾಲರು ಭರದಿಂದೋಡಿದರು!
ಜನರೆಲ್ಲಾ ಗೋಳಾಡಿದರು!
ಬೊಮ್ಮನಹಳ್ಳಿಯ ಕಿಂದರಿಜೋಗಿ
ಮಕ್ಕಳ ಹೊಳೆಯೊಳಗಿಳಿಸುವನೆಂದು,
ಓಡಿದರೆಲ್ಲರು ಜೋಗಿಯ ಹಿಂದೆ.
ಹೊಳೆಯಾ ತೀರವ ಜೋಗಿಯು ಸೇರಿ,
ನೀರೊಳಗಿಳಿಯದೆ ಬಲಗಡೆ ತಿರುಗಿ,
ಚೌಡಿಯ ಬೆಟ್ಟಕ್ಕಭಿಮುಖನಾದ,
ಭರದಿಂ ಬೇಗನೆ ಮುಂದಕೆ ಹೋದ.
ಬೆಟ್ಟವನವನೇರುವುದಿಲ್ಲೆಂದು
ಹಾರೈಸಿದರಾ ಊರಿನ ಜನರು.
ಬೆಟ್ಟದ ಬುಡವನು ಸೇರಿದ ಜೋಗಿ,
ನಿಲ್ಲುವನೆಂದೆಲ್ಲಾ ಬಯಸಿದರು!

೧೪

ಹಸಿದು ನಿಂತರು ಜನರೆಲ್ಲ!
'ಅಯ್ಯೋ ಮಕ್ಕಳೆ!' ಎಂದೆನುತ,
ಜೋಗಿಯು ಬಾರಿಸೆ ಕಿಂದರಿಯ
ಬಾಗಿಲು ತೆರೆಯಿತು ಆ ಗಿರಿಯು!
ಜೋಗಿಯು ನುಗ್ಗಿದನದರಲ್ಲಿ
ಹಿಂದೆಯೆ ಹೋದರು ಬಾಲಕರು!
ಬೆಟ್ಟವು ಬಾಗಿಲ ಹಾಕಿತು ಬೇಗ
ಹಿಂದಕ್ಕುಳಿದವನೊಬ್ಬನೆ ಕುಂಟ.
ಅಲ್ಲಿಗೆ ಬಂದರು ಜನರೋಡಿ
ಕುಂಟನ ಕಂಡರು ಒಂಟಿಯಲಿ,
ಕುಂಟನನುಳಿದವರೆಲ್ಲೆಂದು
ಕೇಳಲು ಬೆಟ್ಟವ ತೋರಿದನು.
ಕಂಬನಿಗರೆದರು ಗೋಳಾಡಿದರು

ಜೋಗಿಯ ಕೂಗಂತ ಬಲು ಬೇಡಿದರು.
ಬೆಟ್ಟವು ಕೊಟ್ಟಿತು ಮರುದನಿಯ
ಭೂಮಿಯು ಹೀರಿತು ಕಂಬನಿಯ.
ಉಳಿದಾ ಕುಂಟನು ಅಳುತಿಂತೆಂದ;
'ಅಯ್ಯೋ ನನಗಿಲ್ಲವರಾನಂದ!
ಜೋಗಿಯು ಕಿಂದರಿ ಬಾರಿಸೆ ಕಂಡೆವು
ಬಣ್ಣದ ಮನೆಗಳ ಪಟ್ಟಣವ,
ಹಣ್ಣುಗಳುದುರಿದ ತೋಟಗಳ
ನಾನಾ ಆಟದ ಸಾಮಾನುಗಳ,
ತರತರ ರಾಗದ ಗೊಂಬೆಗಳ,
ಮಾತಿಗೆ ಮೀರಿದ ಆನಂದಗಳ
ಕೈಗೇ ಸಿಕ್ಕುವ ಹಕ್ಕಿಗಳ;
ಜಿಂಕೆಗಳೆಮ್ಮೊಡನಾಡುವಲ್ಲಿ
ಮೊಲಗಳು ಕುಳಿತವು ನ್ಯಾಯದಲ್ಲಿ!
ಅಯ್ಯೋ, ಹೋಯಿತೆ ಆ ನಾಕ
ಅಯ್ಯೋ, ಬಂದಿತೆ ಈ ಲೋಕ!'

೧೮

ಬಂದನು ಎಲ್ಲರು ಬೊಮ್ಮನಹಳ್ಳಿಗೆ
ದುಃಖಾಂಬುಧಿಯೊಳಗೀಜಾಡಿ
ಕಂಬನಿಗರೆದರು ಗೋಳಾಡಿ!
ಈಗಾ ಹಳ್ಳಿಯ ಜೀವಿಗಳಾರೂ
ಕಿಂದರಿನಾದವನಾಲಿಸರು;
ಕಿಂದರಿ ಜೋಗಿಗಳಲ್ಲಿಗೆ ಬಂದರೆ
ಬೇಕಾದ್ದೆಲ್ಲವನೀಯುವರು!
ಭಾಷೆಯ, ಕೊಟ್ಟರೆ, ಮಿತ್ರರೇ, ನಾವು
ಮೋಸವ ಮಾಡದೆ ಸಲ್ಲಿಸಬೇಕು.
ಆದುದರಿಂದ, ಮಿತ್ರರೇ, ಕೇಳು
ಸತ್ಯವನೆಂದೂ ತ್ಯಜಿಸದೆ ಬಾಳು!

## ಮಕ್ಕಳ ಕಥೆಗಳು

### ಆರು ಪೈ

ಅಗ್ಗಣಿ ಮುದ್ದೆ

### ಒಂಭತ್ತು ಪೈ

ಗಾಳಿಯ ಕೋಳಿ, ಪುಕ್ಕದ ಕಪ್ಪು
ಬಿಟ್ಟೀ ಬಸವಯ್ಯ
ಅಂಗಳದುಗ್ಗು
ಜೋಡು ನಕ್ಷತ್ರ
ಕೊ ಕ್ಕೊ ಕ್ಕೋ ಕೋಳಿ

### ಒಂದು ಆಣೆ

ಮೂರು ಕರಡಿಗಳು
ಮೆಣಸಿನ ಕಾಳಪ್ಪ
ಬಸ್ತನ ಓಟ
ಗೋವಿಂದಾ! ಗೋವಿಂದಾ!
ಬೆಕ್ಕಿನ ಪಿತಾರ ಚೀರೆ
ಸಿಗಡಿ ಯಾಕೆ ಒಣಗಲಿಲ್ಲ?
ಗುಡುಗುಡು ಗುಮ್ಮಟ ದೇವರು

*ಇಲಿಗಳ ಥಕ್ಕಥಯ್ಯ
*ತಟಪಟ ಹನಿಯಪ್ಪ
*ಕೇಸು ಸತ್ತು ಕಾಗೆ ಬ[illegible]
ಮಾತಾಡೋ ರಾಮಪ್ಪ
ಗೋಣಿತಟ್ಟಿನ ಪಟ್ಟೆಹುಲಿ

### ಒಂದು ಆಣೆ ಮೂರು ಪೈ

ಏಕ್‌ರೋಜ್‌ಕಾ ಖಲೀಫಾ

### ಒಂದು ಆಣೆ ಆರು ಪೈ

ಬೊಕ್ಕಬಾಯಿ ಕೊಕ್ಕರಾಜ

### ಎರಡು ಆಣೆ

ಸಿಂದಬಾದ ನಾವಿಕ
ಅಲ್ಲಾವುದ್ದೀನನ ವಿಚಿತ್ರ ದೀಪ

### ಎರಡು ಆಣೆ ಆರು ಪೈ

*ಅಜ್ಜ ಸಾಕಿದ ಮಗು
*ಅಗೋಳಿ ಮಂಜಣ

## ಇತರ ಪುಸ್ತಕಗಳು

### ಒಂಭತ್ತು ಪೈ

ಮಗ್ಗಿ ಪುಸ್ತಕ

### ಎರಡು ಆಣೆ

ಹೊಸ ಕನ್ನಡ ಪುಸ್ತಕ ೧ನೇ ಭಾಗ
೨ನೇ ಭಾಗ

ಚೀನ
ಅಫಘಾನಿಸ್ಥಾನ

### ಮೂರು ಆಣೆ

ರತಿಕಾಂತನ ಮೇಲು
ಚಂದ್ರಕೌಶಿಕ
ಕಾಣಿಕೆ

### ನಾಲ್ಕು ಆಣೆ

ಸಮಾಜಜ್ಯೋತಿ
ವಾರಂಗಲ್ಲಿನ ಗತವೈಭವ
ಕೃಷ್ಣ ಸಂಧಾನ

ಒಂದನೆ ಎರಡನೆ ದರ್ಜೆಯ ಕಥೆಗಳು (೧)

### ಐದು ಆಣೆ

ಒಂದನೆ ಎರಡನೆ ದರ್ಜೆಯ ಕಥೆಗಳು (೨)
ಐದನೆ ದರ್ಜೆಯ ಚರಿತ್ರೆ ಮತ್ತು ಕಥೆಗಳು
ಅಜಿತ ಕುಮಾರ

ಚಾಣಕ್ಯತಂತ್ರ ೧ನೆಯ ಭಾಗ

### ಆರು ಆಣೆ

ಕೋಟಿಚೆನ್ನಯ
ರಮಾ ಮಾಧವ
ಸೀತಾರಾಮು
ಯಾದವ ಕೃಷ್ಣ
ಭೀಷ್ಮನ ಕಥೆ
ಪದ್ಯಕಥಾವಳಿ ಭಾಗ ೧
ಕಾವ್ಯರತ್ನಾಕರ

### ಎಂಟು ಆಣೆ

ಕಲಿಯುಗದ ಭೀಷ್ಮ
ಹಿಡಿಂಬೆ
ಚಾಣಕ್ಯತಂತ್ರ ೨ನೆಯ ಭಾಗ
*ಲಘುವಿಜ್ಞಾನ ಪಾಠಮಾಲಿಕೆ, ಪ್ರಥಮ ಪುಸ್ತಕ (೧)
*ಲಘುವಿಜ್ಞಾನ ಪಾಠಮಾಲಿಕೆ ಪ್ರಥಮ ಪುಸ್ತಕ (೨)
ಪದ್ಯಸಂಗ್ರಹ
ಪದ್ಯಕಥಾವಳಿ ಭಾಗ ೨

### ಹತ್ತು ಆಣೆ

ನಾಟಕ ಕಲೆ

### ಹನ್ನೆರಡು ಆಣೆ

ರಾಮಾಶ್ವಮೇಧ

ಸುಭದ್ರಾ ವಿಜಯ ನಾಟಕ (೧ ರೂಪಾಯಿ)

---

*ಇವು ಸಚಿತ್ರ ಪುಸ್ತಕಗಳು

